

# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 16-03-2021 ಪ್ರಶ್ನೆ ಸಂಖ್ಯೆ : 1156 (1221)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಯು.ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 16-03-2021

ಉತ್ತರಿಸುವ ಸಚಿವರು: ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು

ವಿಷಯ : ಕೆ.ಪಿ.ಎಸ್.ಸಿ ಯಲ್ಲಿ 2015ನೇ ಸಾಲಿನ ಚೀಫ್ ಆಫೀಸರ್ (ಗ್ರೇಡ್-1) ನೇಮಕಾತಿ ಕುರಿತು

(ಅ) ಕರ್ನಾಟಕ ಲೋಕಸೇವಾ ಆಯೋಗವು 2015ನೇ ಸಾಲಿನ ಗೆಜೆಟೆಡ್ ಪ್ರೊಬೇಷನರಿ ಹುದ್ದೆಗಳಿಗೆ ನಡೆಸಲಾದ ಪರೀಕ್ಷೆಯಲ್ಲಿ ಎಷ್ಟು ಚೀಫ್ ಆಫೀಸರ್ (ಗ್ರೇಡ್-1) (ಮೂಲವೃಂದ) ಹುದ್ದೆಗಳಿಗೆ ಆಯ್ಕೆ ಮಾಡಿ ನೇಮಕಾತಿಗಾಗಿ ಸರ್ಕಾರಕ್ಕೆ ಕಳುಹಿಸಲಾಗಿದೆ ;

(ಆ) ಈ ಹುದ್ದೆಗಳ ಪೈಕಿ ನೇಮಕಾತಿ ಆದೇಶ ನೀಡುವ ಮುನ್ನ ದಾಖಲಾತಿಗಳ ಪರಿಶೀಲನೆಗಾಗಿ ದಾಖಲಾತಿಗಳನ್ನು ಒದಗಿಸಲು ತಿಳಿಸಿದ ನಂತರವೂ, ದಾಖಲಾತಿಗಳನ್ನು ಒದಗಿಸದೇ ಗೈರು ಹಾಜರಾದ ಅಥವಾ ಹುದ್ದೆಗೆ ಹಾಜರಾಗುವುದಿಲ್ಲವೆಂದು ಲಿಖಿತ ಮೂಲಕ ತಿಳಿಸಿರುವ ಅಭ್ಯರ್ಥಿಗಳ ಸಂಖ್ಯೆ ಎಷ್ಟು ;

(ಇ) ಅಂತಹ ಅಭ್ಯರ್ಥಿಗಳ ಹೆಸರು ಮತ್ತು ಅವರು ಆಯ್ಕೆಯಾಗಿರುವ ಮೀಸಲಾತಿಯ ಪ್ರವರ್ಗಗಳ ವಿವರಗಳನ್ನು ನೀಡುವುದು ;

(ಈ) ಆಯ್ಕೆ ಮಾಡಿ ಸರ್ಕಾರಕ್ಕೆ ಕಳುಹಿಸಲಾದ ಈ ಹುದ್ದೆಗಳ ಪೈಕಿ ನೇಮಕಾತಿ ಆದೇಶ ನೀಡಿದ ನಂತರವೂ ಈವರೆವಿಗೂ ಕರ್ತವ್ಯಕ್ಕೆ ಎಷ್ಟು ಅಭ್ಯರ್ಥಿಗಳು ವರದಿ ಮಾಡಿಕೊಂಡಿರುವುದಿಲ್ಲ ;

(ಉ) ಅಂತಹ ಅಭ್ಯರ್ಥಿಗಳ ಹೆಸರು ಮತ್ತು ಅವರು ಆಯ್ಕೆಯಾಗಿರುವ ಮೀಸಲಾತಿ ಪ್ರವರ್ಗಗಳ ವಿವರಗಳನ್ನು ನೀಡುವುದು ?